ಅಂತವನ್ನು ತಲುಪುವುದಿಲ್ಲ. ಆದ್ದರಿಂದ ಜಗತ್ಕಾರಣವಾದ ವಸ್ತುವು ದೇಶದಿಂದ ಅನಂತವಾದುದು. ಅದರಂತೆ ಕಾಲದಿಂದಲೂ ಮತ್ತು ಗುಣಗಳಿಂದಲೂ ಅನಂತವಾದುದು ಎಂದು ತಿಳಿಯಬೇಕು.

'ಯೋಗಿನಸ್ತಂ ಪ್ರಪಶ್ಯಂತಿ' ಎಂದರೆ ಯೋಗಿಗಳು ಅಂತಹ ಕಾಲನಿಯಾಮಕ ಭಗವದ್ರೂಪವನ್ನು ನೋಡುತ್ತಾರೆ ಎಂದು ಅರ್ಥ.

**ನದರ್ಶನೇ ತಿಷ್ಠತಿ ರೂಪಮಸ್ಯ**
**ಪಶ್ಯಂತಿ ಚೈನಂ ಸುಸಮಿದ್ಧಸತ್ತ್ವಾಃ ।**
**ಹೀನೋ ಮನೀಷೀ ಮನಸಾಽಭಿಪಶ್ಯೇದ್**
**ಯೇ ಪ್ರವ್ರಜೇಯುರಮೃತಾಸ್ತೇ ಭವಂತಿ ॥**
**ಯೋಗಿನಸ್ತಂ ಪ್ರಪಶ್ಯಂತಿ ಭಗವಂತಂ ಸನಾತನಮ್ ॥೨೧॥**

ಅಸ್ಯ ರೂಪಂ= ಆ ಪರಮಾತ್ಮನ ರೂಪವು, ದರ್ಶನೇ ನ ತಿಷ್ಠತಿ= ದರ್ಶನ ವಿಷಯವಾಗುವುದಿಲ್ಲ, ಹಾಗಾದರೆ ಅವನು ಶೂನ್ಯನೇ ಎಂಬ ಶಂಕೆಗೆ ಸಮಾಧಾನವನ್ನು ಹೇಳುತ್ತಾರೆ. ಸುಸಮಿದ್ಧಸತ್ತ್ವಾಃ= ಚೆನ್ನಾಗಿ ಅಭಿವೃದ್ಧವಾದ ಸತ್ತ್ವಗುಣವುಳ್ಳ ಯೋಗಿಗಳು, ಏನಂ ಹಿ= ಪರಮಾತ್ಮನನ್ನು, ಪಶ್ಯಂತಿ= ನೋಡುತ್ತಾರೆ. ಪರಮಾತ್ಮನ ದರ್ಶನಕ್ಕೆ ಅವಶ್ಯಕವಾದ ಬೇರೆ ಸಾಧನಗಳನ್ನೂ ಹೇಳುತ್ತಾರೆ. ಹೀನಃ= ರಾಗ-ದ್ವೇಷಾದಿ ಹೀನರಾಗಿ, ಮನೀಷೀ= ಶಾಸ್ತ್ರಾರ್ಥಜ್ಞಾನವನ್ನು ಹೊಂದಿ, ಯೇ ಪ್ರವ್ರಜೇಯುಃ= ಯಾರು ಗುರುಕುಲ ವಾಸಾದಿಗಳನ್ನು ಮಾಡಿರುತ್ತಾರೆಯೋ, ಅಥವಾ ಸಂನ್ಯಾಸವನ್ನು ಸ್ವೀಕರಿಸಿರುತ್ತಾರೆಯೋ ಅವರು, ಮನಸಾ= ತಮ್ಮ ಮನಸ್ಸಿನಿಂದಲೇ, ಅವಿಪಶ್ಯೇತ್= ಅವನನ್ನು ನೋಡುತ್ತಾರೆ. ತೇ= ಅಂತಹ ಯೋಗಿಗಳು, ಅಮೃತಾ ಭವಂತಿ= ಮುಕ್ತರಾಗುತ್ತಾರೆ.

**ಇಮಂ ಯಃ ಸರ್ವಭೂತೇಷು ಆತ್ಮಾನಮನುಪಶ್ಯತಿ ।**
**ಅನ್ಯತ್ರಾನ್ಯತ್ರ ಯುಕ್ತೇಷು ಕಿಂ ಸ ಶೋಚೇತ್ ತತಃ ಪರಮ್ ॥೨೨॥**

ಇಂದ್ರಿಯಾದಿಗಳಿಂದ ಯುಕ್ತವಾದ ಸರ್ವಜೀವರ ಬೇರೆ ಬೇರೆ ದೇಹಗಳಲ್ಲಿ ಯಾವನು ಈ ಪರಮಾತ್ಮನನ್ನು ನೋಡುತ್ತಾನೆಯೋ ಅವನು ಅನಂತರ ಪುನಃ ಸಂಸಾರ ದುಃಖವನ್ನು ಅನುಭವಿಸುತ್ತಾನೆಯೇ? ಎಂದಿಗೂ ಇಲ್ಲ ಎಂದು ಅಭಿಪ್ರಾಯ.

**ಯಥೋದಪಾನೇ ಮಹತಿ ಸರ್ವತಃ ಸಂಪ್ಲುತೋದಕೇ ।**
**ಏವಂ ಸರ್ವೇಷು ವೇದೇಷು ಬ್ರಾಹ್ಮಣಸ್ಯ ವಿಜಾನತಃ ॥೨೩॥**

ಹೇಗೆ ಬಾಯಾರಿದವನಿಗೆ ಉದಪಾನೇ ಎಂದರೆ ಕೂಪದಲ್ಲಿ ತೃಷಾನಿವೃತ್ತಿ ರೂಪ ಫಲವು ಉಂಟಾಗುತ್ತದೆಯೋ, ಸರ್ವತಃ ಸಂಪ್ಲುತೋದಕೇ= ಎಲ್ಲ ಕಡೆಯಲ್ಲಿಯೂ ನೀರು ತುಂಬಿರುವ, ಮಹತಿ= ಅದಕ್ಕಿಂತ ದೊಡ್ಡ ಪರಿಮಾಣವುಳ್ಳ ಸಮುದ್ರದಲ್ಲಿ ಅದಕ್ಕಿಂತ ಹೆಚ್ಚಿನ ಪ್ರಯೋಜನವು ದೊರೆಯುತ್ತದೆ. ಅದರಂತೆ ಎಲ್ಲ ಜೀವರಲ್ಲಿಯೂ ಪರಮಾತ್ಮನನ್ನು ನೋಡುವ ಜ್ಞಾನಿಗೆ ಕಾಮ್ಯಕರ್ಮದಿಂದ ಉಂಟಾಗುವ ಸ್ವರ್ಗಾದಿ ಫಲವೂ ಮತ್ತು ಅದಕ್ಕಿಂತ ಅಧಿಕವಾದ ಮೋಕ್ಷಾದಿ ಫಲವೂ ಉಂಟಾಗುತ್ತದೆ ಎಂದು ಅರ್ಥ. ಇದರಿಂದ ಸ್ವರ್ಗಾದಿ ಸರ್ವಫಲ ಸಾಧನಜ್ಞಾನವಿಷಯತ್ವರೂಪವಾದ ಪರಮಾತ್ಮನ ಮಹಿಮೆಯು ಹೇಳಲ್ಪಡುತ್ತದೆ.

**ಅಹಮೇವಾಸ್ಮಿ ತೇ ಮಾತಾ ಪಿತಾ ಪುತ್ರೋಽಸ್ಮ್ಯಹಂ ಪುನಃ ।**
**ಆತ್ಮಾಽಹಮಪಿ ಸರ್ವಸ್ಯ ಯಚ್ಚ ನಾಸ್ತಿ ಯದಸ್ತಿ ಚ ॥೨೪॥**

ಈಗ ಭಗವಂತನ ಗುಣಾಂತರ ಪ್ರತಿಪಾದಕವಾದ ಭಗವಂತನೇ ಜೀವರನ್ನು ಕುರಿತು ಆಡಿದ ಮಾತುಗಳನ್ನು ಸನತ್ಸುಜಾತರು ಅನುವಾದ ಮಾಡುತ್ತಾರೆ. ಅಥವಾ ಈ ಮಾತುಗಳನ್ನು 'ಶಾಸ್ತ್ರದೃಷ್ಟ್ಯಾ ತೂಪದೇಶೋ ವಾಮದೇವವತ್' ಎಂಬ ಬ್ರಹ್ಮಸೂತ್ರದಲ್ಲಿ ಹೇಳಿದಂತೆ ಸನತ್ಸುಜಾತರ ಅಂತರ್ಯಾಮಿಯ ಅಭಿಪ್ರಾಯದಿಂದಲೂ ಕೂಡಿಸಬಹುದು. ಎಲೈ ಜೀವರೇ, ನಾನು ನಿಮ್ಮ ತಂದೆ, ತಾಯಿ ಮತ್ತು ಪುನ್ನಾಮ ನರಕದಿಂದ ರಕ್ಷಿಸುವ ಪುತ್ರನೂ ಆಗಿದ್ದೇನೆ. ಯಾವುದು ಈಗ ಇಲ್ಲವೋ ಅಂತಹ ಅತೀತ-ಭವಿಷ್ಯತ್ಪದಾರ್ಥಗಳಿಗೂ, ಯಾವುದು ಈಗ ಇದೆಯೋ ಅಂತಹ ವರ್ತಮಾನ ಪದಾರ್ಥಗಳಿಗೂ, ಸರ್ವಸ್ಯ ಎಲ್ಲದಕ್ಕೂ ನಾನು ಸ್ವಾಮಿಯಾಗಿದ್ದೇನೆ.

**ಪಿತಾಮಹೋಽಸ್ಮಿ ಸ್ಥವಿರಃ ಪಿತಾ ಪುತ್ರಶ್ಚ ಭಾರತ ।**
**ಮಮೈವ ಯೂಯಮಾತ್ಮಸ್ಥಾ ನ ಮೇ ಯೂಯಂ ನ ಚಾಪ್ಯಹಮ್ ॥**

ಭಾರತ ಎಂದು ಧೃತರಾಷ್ಟ್ರನನ್ನು ಕುರಿತು ಸನತ್ಸುಜಾತರ ಸಂಬೋಧನೆ. ಅಥವಾ ಭಾ= ಜ್ಞಾನದಲ್ಲಿ, ರತ= ಆಸಕ್ತನಾದ ಜೀವನೇ ಎಂದು ಜೀವರನ್ನು ಕುರಿತು ಪರಮಾತ್ಮನ

ಸಂಬೋಧನೆ. ಈ ಶ್ಲೋಕದಲ್ಲಿ ಮತ್ತು ಹಿಂದಿನ ಶ್ಲೋಕದಲ್ಲಿ ಭಾರತ ಎಂದು ತೇ ಎಂದು ಏಕವಚನವಿದ್ದರೂ ಅದು ಸಮುದಾಯಏಕವಚನವಾದ್ದರಿಂದ ಎಲ್ಲಜೀವರನ್ನೂ ಉದ್ದೇಶಿಸಿ ಆಡಿದ ಮಾತುಗಳು ಎಂದು ತಿಳಿಯಬೇಕು. ಇದೂ ಸಹ ಪರಮಾತ್ಮನದೇ ಮಾತು. ನಾನು ಈ ಜಗತ್ತಿಗೆ ಪ್ರಪಿತಾಮಹನಾಗಿದ್ದೇನೆ. ಪಿತೃವೂ ಆಗಿದ್ದೇನೆ. 'ಯೋನಃ ಪಿತಾ ಜನಿತಾ' ಎಂದು ಶ್ರುತಿ ಇದೆಯಷ್ಟೆ! ಮತ್ತು ಪುತ್ರನೂ ಆಗಿದ್ದೇನೆ. ನೀವೆಲ್ಲರೂ ನನ್ನ ದೇಹದಲ್ಲಿಯೇ ಇರುವವರು (ನನ್ನ ಸ್ವರೂಪವಾದ ನನಗಿಂತ ಅಭಿನ್ನವಾದ ನನ್ನ ದೇಹವನ್ನೇ ಆಶ್ರಯಿಸಿ ಇರುವವರು). ನೀವು ನನಗೆ ಸಂಬಂಧಿಸಿದವರಲ್ಲ (ನಾನು ನಿಮ್ಮನ್ನು ಉಪಜೀವಿಸಿ ಇರುವುದಿಲ್ಲ ಮತ್ತು ನಿಮ್ಮ ದುಃಖದಿಂದ ದುಃಖವನ್ನೂ ಪಡುವುದಿಲ್ಲ). ನಾನೂ ಕೂಡ ನಿಮಗೆ ಸಂಬಂಧಿಸಿದವನಲ್ಲ (ಸಂಬಂಧವಿದ್ದರೂ ನಿಮಗೆ ಸಂಬಂಧದ ಜ್ಞಾನವಿಲ್ಲದಿರುವುದರಿಂದ ಸಂಬಂಧಿಸಿದವನಲ್ಲ ಎಂದು ಅಭಿಪ್ರಾಯ).

ಅಂತರ್ಯಾಮಿ ವಿವಕ್ಷೆಯಿಂದ ಸನತ್ಸುಜಾತರ ಮಾತುಗಳನ್ನು ಕೂಡಿಸಬೇಕು ಎಂದು ವಾದಿರಾಜರು ಹೇಳಿರುವುದರಿಂದ ಎಲೈ ಧೃತರಾಷ್ಟ್ರನೇ, ನಾನೇ ನಿನ್ನ ತಂದೆಯೂ ಆಗಿದ್ದೇನೆ, ತಾಯಿಯೂ ಆಗಿದ್ದೇನೆ, ದುರ್ಯೋಧನಾದಿ ಪುತ್ರನೂ ಆಗಿದ್ದೇನೆ ಎಂಬ ಪರಕೀಯ ವ್ಯಾಖ್ಯಾನವು ಪೂರ್ವೋತ್ತರ ವಿರುದ್ಧವಾದುದರಿಂದ ಸ್ವೀಕಾರಾರ್ಹವಲ್ಲ ಎಂದು ಸಿದ್ಧವಾಗುತ್ತದೆ.

ಆತ್ಮೈವ ಸ್ಥಾನಂ ಮಮ ಜನ್ಮ ಚಾತ್ಮಾ
ಓತಪ್ರೋತೋಽಹಮಜರಪ್ರತಿಷ್ಠಃ ।
ಅಜಶ್ಚರೋ ದಿವಾರಾತ್ರಮತಂದ್ರಿತೋಽಹಂ
ಮಾಂ ವಿಜ್ಞಾಯ ಕವಿರಾಸ್ತೇ ಪ್ರಸನ್ನಃ ॥೨೬॥

ಈಗ ಪರಮಾತ್ಮನು ತಾನು ಅನ್ಯಾಪೇಕ್ಷೆ ಇಲ್ಲದವನು ಎಂದು ಹೇಳುತ್ತಾನೆ. ಮಮ= ನನಗೆ, ಆತ್ಮೈವ= ನಾನೇ, ಸ್ಥಾನಮ್= ಆಶ್ರಯನಾದವನು, ಆತ್ಮಾ= ನಾನೇ, ಜನ್ಮ= ನನ್ನ ಪ್ರಾದುರ್ಭಾವಕ್ಕೆ ನಿಯಾಮಕನಾದವನು. ಅಜರಪ್ರತಿಷ್ಠಃ= ಜರಾರಹಿತವಾದ ವೈಕುಂಠಾದಿ ಲೋಕಗಳಲ್ಲಿ ಪ್ರತಿಷ್ಠಿತನಾಗಿರುವ ನಾನು, ಓತಪ್ರೋತಃ= ನನ್ನಲ್ಲೇ ವ್ಯಾಪಿಸಿಕೊಂಡಿದ್ದೇನೆ. ಅಜಃ= ನಾನು ಜನ್ಮವಿಲ್ಲದವನು, ಅತಂದ್ರಿತಃ= ಆಲಸ್ಯವಿಲ್ಲದೆ,

ದಿವಾರಾತ್ರಂ= ಹಗಲೂ ಮತ್ತು ರಾತ್ರಿಯೂ, ಚರಃ= ಎಲ್ಲ ಕ್ರಿಯೆಗಳನ್ನೂ ಮಾಡುವವನು, ನ ಋತೇ ತ್ವತ್‌ಕ್ರಿಯತೇ= ನೀನಿಲ್ಲದೇ ಯಾವ ಕಾರ್ಯವೂ ಮಾಡಲ್ಪಡುವುದಿಲ್ಲ ಎಂಬ ಶ್ರುತಿಯ ವಿವಕ್ಷೆಯಿಂದ ನನ್ನನ್ನು ತಿಳಿದು ಜ್ಞಾನಿಯಾದವನು ಸ್ವರೂಪ ಸುಖವನ್ನು ಅನುಭವಿಸುತ್ತಾನೆ.

**ಅಣೋರಣೀಯಾನ್ ಸುಮನಾಃ ಸರ್ವಭೂತೇಷ್ವವಸ್ಥಿತಃ ।**
**ಪಿತರಂ ಸರ್ವಭೂತಾನಾಂ ಪುಷ್ಕರೇ ನಿಹಿತಂ ವಿದುಃ ॥೨೭॥**

ಸನತ್ಸುಜಾತರು ಪುನಃ ಭಗವಂತನ ಮಹಿಮೆಯನ್ನು ಹೇಳುತ್ತಾರೆ. ಭಗವಂತನು ಅಣುವಿಗಿಂತಲೂ ಬಹಳ ಸೂಕ್ಷ್ಮವಾದ ಅಣುವಾದವನು. ಸುಮನಾಃ= ಒಳ್ಳೆಯ ಮನಸ್ಸುಳ್ಳವನು, ಸರ್ವಭೂತೇಷು ಅವಸ್ಥಿತಃ= ಎಲ್ಲ ಭೂತಗಳಲ್ಲಿಯೂ ನೆಲೆಸಿದ್ದಾನೆ. ಸರ್ವಭೂತಾನಾಂ= ಎಲ್ಲ ಪ್ರಾಣಿಗಳ, ಪಿತರಂ= ತಂದೆಯಾದ ಅವನನ್ನು, ಪುಷ್ಕರೇ= ಹೃದಯಕಮಲದಲ್ಲಿ, ನಿಹಿತಂ= ಇರುವವನೆಂದು, ವಿದುಃ= ಜ್ಞಾನಿಗಳು ತಿಳಿದಿದ್ದಾರೆ.

॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್
ಉದ್ಯೋಗಪರ್ವಣಿ ಸಪ್ತಚತ್ವಾರಿಂಶೋಽಧ್ಯಾಯಃ ॥

॥ ಸನತ್ಸುಜಾತಪರ್ವಣಿ ಷಷ್ಠೋಽಧ್ಯಾಯಃ ॥

॥ ಇತಿ ಶ್ರೀಮನ್ಮಹಾಭಾರತೇ ಉದ್ಯೋಗಪರ್ವಣಿ ಸನತ್ಸುಜಾತೀಯೇ
ವಿಷಮವಾಕ್ಯಾರ್ಥಪ್ರಕಾಶೇ ಷಷ್ಠೋಽಧ್ಯಾಯಃ ॥

ಇಲ್ಲಿಗೆ ಮಹಾಭಾರತದ ಉದ್ಯೋಗಪರ್ವದಲ್ಲಿ ನಲವತ್ತೇಳನೆಯ
ಅಧ್ಯಾಯ ಮುಗಿಯಿತು.

## ॥ ಸಮಾಪ್ತಂ ಸನತ್ಸುಜಾತೀಯ ಪರ್ವ ॥

★ ★ ★ ★ ★



ಅರೋಷಣೋ ಯಃ ಸಮಲೋಷ್ಟಕಾಂಚನಃ

ಪ್ರಹೀಣಶೋಕೋ ಗತಸಂಧಿವಿಗ್ರಹಃ ।

ನಿಂದಾಪ್ರಶಂಸೋಪರತಃ ಪ್ರಿಯಾಪ್ರಿಯೇ

ಚರನ್ನುದಾಸೀನವದೇವ ಭಿಕ್ಷುಕಃ ॥

ಯಾವನು ರೋಷವನ್ನು ತೊರೆದಿರುತ್ತಾನೆಯೋ, ಮಣ್ಣು ಮತ್ತು ಸುವರ್ಣಗಳನ್ನು ಸಮವಾಗಿ ನೋಡುತ್ತಾನೆಯೋ, ಶೋಕವನ್ನೂ ತೊರೆದಿರುತ್ತಾನೆಯೋ, ಯಾರ ಜೊತೆಯಲ್ಲಿಯೂ ಸಂಧಿಯನ್ನಾಗಲೀ ವಿರೋಧವನ್ನಾಗಲೀ ಮಾಡುವುದಿಲ್ಲವೋ, ನಿಂದಾ-ಪ್ರಶಂಸೆಗಳನ್ನು, ಪ್ರಿಯಾಪ್ರಿಯಗಳನ್ನು ಬಿಟ್ಟು ಉದಾಸೀನನಂತೆಯೇ ಸಂಚರಿಸುತ್ತಾನೆಯೋ ಅವನು ಸಂನ್ಯಾಸಿ.



ISBN : 978-93-81807-67-5